|| ಶ್ರೀ ಲಕ್ಷ್ಮೀ ವೆಂಕಟೇಶ ಪ್ರಸನ್ನ ||

# ಮನಮೋಹಿನಿ

ಅಥವಾ

## ಕರೀ ಮೊಸಡಿಯ ಹೆಂಡತಿ.



ಕೃಷ್ಣರಾಯನು ಕರ್ನಾಟಕ ಕಾಲೇಜದಲ್ಲಿ ಇಂಟರ ಕ್ಲಾಸಿನಲ್ಲಿ ಇದ್ದನು. ಆದರೆ ಆ ಕಾಲೇಜದಲ್ಲಿ ಕಲಿಯುವದು ಮಾತ್ರ ಅವನ ಮನಸ್ಸಿನಲ್ಲಿದ್ದಿಲ್ಲ. ಆಂಗ್ಲ ವಿದ್ಯೆಯ ಮೇಲೆ ಅವನ ಶ್ರದ್ಧೆಯೇ ಇದ್ದಿಲ್ಲ. ಅಷ್ಟೇಕೆ? ಈ ಆಂಗ್ಲವಿದ್ಯೆಯಿಂದಲೇ ನಮ್ಮ ದೇಶದ [illegible]ಶವಾಯಿತೆಂದು ಅವನ ಮತವಿತ್ತು. ಆಂಗ್ಲವಿದ್ಯೆಯಿಂದಲೇ ನಮ್ಮ ರಾಷ್ಟ್ರದ ಊರ್ಜಿತ್ವವು ನಷ್ಟವಾಯಿತು; ಅನಾಚಾರವು [illegible]ಳೆಯಹತ್ತಿತು; ಜಾತಿಮತ್ಸರವು ಹೆಚ್ಚಾಯಿತು; ದೇಶದಲ್ಲಿ [illegible]ಕ್ಕಟ್ಟು ಇಲ್ಲದಂತಾಯಿತು; ಮತ್ತು ಪ್ರಾಚೀನ ಕಾಲದ ಸತ್ಯಯುಗ ದಲ್ಲಿಯ ಮಂಗಲಕರವಾದ ದಿವಸಗಳು ಸ್ವಪ್ನಸೃಷ್ಟಿಯಲ್ಲಾದರೂ ಕಾಣದಂತಾದವು; ಎಂಬಿವೇ ಮೊದಲಾದ ವಿಚಾರಗಳು ಅವನ ಮುಖದಿಂದ ಮೇಲಿಂದ ಮೇಲೆ ಹೊರಡುತ್ತಿದ್ದವು. ಆದರೆ ಅವನು ತನ್ನ ತಾಯಿಯ ಅತ್ಯಾಗ್ರಹದಿಂದಲೇ ಇಂಗ್ಲೀಷ ವಿದ್ಯಾಭ್ಯಾಸವನ್ನು ಮಾಡಹತ್ತಿದ್ದನು. ಇಲ್ಲದಿದ್ದರೆ ಅವನು ಎಂದೋ ಕಾಶೀ ಪ್ರಯಾಗಾದಿ ಪುಣ್ಯಕ್ಷೇತ್ರಗಳಲ್ಲಿಯ ಬ್ರಹ್ಮಚಾರಿಗಳ ಮಾಲೆಯಲ್ಲಿ ಸೇ[illegible]

ಸ್ನಾನಸಂಧ್ಯಾ, ಜಪತಪ, ಸಮಾಧಿಯೋಗ ಮೊದಲಾದ ಸತ್ಕರ್ಮಗಳಲ್ಲಿ ತನ್ನ ಆಯುಷ್ಯದ ಸದುಪಯೋಗ ಮಾಡುತ್ತಿದ್ದನು. ಸ್ವಲ್ಪದರಲ್ಲಿ ಹೇಳಬೇಕೆಂದರೆ, ಅವನು ಇಂಟರ ಕ್ಲಾಸಿನವರೆಗೆ ಇಂಗ್ಲೀಷ ಭಾಷೆಯನ್ನು ಕಲಿಯುತ್ತ ಬಂದಿದ್ದರೂ ಅವನು ಪೌರಾಣಿಕ ಕಾಲದ ಋಷಿಗಳಂತೆ ತನ್ನ ನಿತ್ಯದ ಸ್ನಾನಸಂಧ್ಯಾ ಮೊದಲಾದ ಕರ್ಮಗಳಲ್ಲಿ ಎಂದೂ ವ್ಯತ್ಯಾಸವನ್ನುಂಟು ಮಾಡಲಿಲ್ಲ.

ಧಾರವಾಡದ ಮಾಳಗುಡ್ಡದಲ್ಲಿ ಕೃಷ್ಣರಾಯನು ಇರುತ್ತಿದ್ದನು. ಅವನು ಬಹಳ ಹೊತ್ತಿನ ವರೆಗೆ ನಡಿಸುವ ಸ್ನಾನಸಂಧ್ಯಾವಂದನೆಯನ್ನೂ, ಗೀತಾ ಪಾಠ ಮಾಡುವದನ್ನೂ ಅವನ ಗೆಳೆಯರು ನೋಡಿ ದಿನಾಲೂ ಚೇಷ್ಟೆ ಮಾಡುತ್ತಿದ್ದರು. ಆದರೆ ಅವನು ಎಂದೂ ಕರ್ಮವಿರತನಾಗಲಿಲ್ಲ. ಎಂದಾದರೊಂದು ದಿನ ಅವನು ಅಭ್ಯಾಸದ ಕಡೆಗೊಂದು ಗಳಿಗೆ ದುರ್ಲಕ್ಷ್ಯ ಮಾಡುತ್ತಿದ್ದನೇ ಹೊರತು ತನ್ನ ನಿತ್ಯ ವಿಧಿಯಲ್ಲಿ ಅಲ್ಲ. ಯಾಕೆಂದರೆ, ಪ್ರಾಚೀನ ಕಾಲದ ಋಷಿಗಳಂತೆ ವರ್ತಿಸುವದೇ ಅವನ ಮಹತ್ವಾಕಾಂಕ್ಷೆಯಾಗಿತ್ತು. ಕಾಲೇಜದಲ್ಲಿ ನಡೆಯುವ ಡಿಬೇಟಿಂಗ ಸೊಸಾಯಿಟಿ ( Debating Society ) ಗಳಲ್ಲಿ ಅವನು ಮೇಲಿಂದ ಮೇಲೆ ಬೇರೆ ಬೇರೆ ವಿಷಯಗಳ ಮೇಲೆ ವ್ಯಾಖ್ಯಾನವನ್ನು ಕೊಡುತ್ತಿದ್ದನು. ಅವನು ವಾದವಿವಾದ ವಿಷಯಗಳಲ್ಲಿ ಆಂಗ್ಲ ಪದ್ಧತಿಯ ಶಿಕ್ಷಣ, ಈಗಿನ ಸುಧಾರಣೆ, ಸುಧಾರಕರು, ಸ್ತ್ರೀ ಶಿಕ್ಷಣ, ಪುನರ್ವಿವಾಹ, ಸ್ತ್ರೀಯರ ಸಾಮಾಜಿಕ ಹಾಗೂ ನೈತಿಕ ಸ್ಥಿತಿ ಮೊದಲಾದವುಗಳನ್ನು ದೂಷಣ ಮಾಡಿ, ಪ್ರಾಚೀನ (ಕಾಲದ) ಋಷಿಗಳ ಸಮಾಜ ಸ್ಥಿತಿಯನ್ನೇ ಕೊಂಡಾಡುತ್ತಿದ್ದನು. ಬರಬರುತ್ತ ಅವನು ಪ್ರಾಚೀನ ಕಾಲದ

ಪದ್ಧತಿಗಳೆಲ್ಲ ಉತ್ತಮವಾದವುಗಳೆಂದೂ* ಅರ್ವಾಚೀನ ಕಾಲದ ಎಲ್ಲ ಪದ್ಧತಿಗಳು ನಿಂದ್ಯವಾದವುಗಳೆಂದೂ ಪ್ರತಿಪಾದಿಸಹತ್ತಿದನು. ಮತ್ತು ತಾನಾದರೂ "ಪ್ರಾಚೀನ ಕಾಲದ ಪದ್ಧತಿಯಂತೆಯೇ ನನ್ನ ವರ್ತನಕ್ರಮವನ್ನಿಡುವೆನು" ಎಂದು ಪ್ರತಿಜ್ಞೆ ಮಾಡಿದನು.

ಕೃಷ್ಣರಾಯರ ಮನೆಯು ಇತಿಹಾಸ ಪ್ರಸಿದ್ಧವಾದ ವಿಜಾಪುರದಲ್ಲಿತ್ತು. ಮನೆಯಲ್ಲಿ ಅವನ ಚಿಕ್ಕ ತಂಗಿ ಹಾಗೂ ತಾಯಿ ಹೀಗೆ ಇಬ್ಬರೇ ಇರುತ್ತಿದ್ದರು. ಹೊಟ್ಟೆ ತುಂಬಿಕೊಳ್ಳುವದಕ್ಕೆ ಅವರ ಪ್ರಪಂಚಕ್ಕೆ ತಕ್ಕ ಹೊಲಮನೆಗಳೂ ಇದ್ದವು. ಮತ್ತು ಮನೆಯಲ್ಲಿ ಬಂಗಾರದ ಕೆಲವು ಆಭರಣಗಳೂ ಇದ್ದವು. ಕೃಷ್ಣರಾಯನ ವಯಸ್ಸು ಈಗ ಇಪ್ಪತ್ತೆರಡು ವರ್ಷಗಳಿರಬಹುದು. ಅವನಿಗೆ ಕನ್ಯೆಯನ್ನು ಕೊಡಬೇಕೆಂದು ಎಷ್ಟೋ ಜನರು ಎಡತಾಕಿ ಹೋದರು. ಯಾಕೆಂದರೆ, ಈಗಿನ ಕಾಲದಲ್ಲಿ ಇಂಗ್ಲಿಷ ಕಲಿತ 'ವರ' ನೆಂದರೆ ತೀರಿತು. ಅವನೆದುರಿಗೆ ಕನ್ಯಾರತ್ನಗಳ ಒಂದು ದೊಡ್ಡ ರಾಶಿಯೇ ಬರುವದು! ಆದರೆ ನಮ್ಮ ಕೃಷ್ಣರಾಯನ ತಲೆಯಲ್ಲಿ ಪ್ರಾಚೀನ ಕಾಲದ ಸಮಾಜ ಸ್ಥಿತಿಯ ಹುಚ್ಚುತನವು ತುಂಬಿದ್ದರಿಂದ "ನಾನು ಲಗ್ನವನ್ನೇ ಮಾಡಿಕೊಳ್ಳುವದಿಲ್ಲ" ಎಂದು ಹಟ ಹಿಡಿದಿದ್ದನು. ಸೊಸೆಯ ಮುಖವನ್ನು ನೋಡಬೇಕೆಂಬ ಕುತೂಹಲವುಳ್ಳ ಅವನ ತಾಯಿಯಾದ ಸೀತಾಬಾಯಿಯು ಮಾಡಿದ ಲಗ್ನದ ಉಪಾಯಗಳೆಲ್ಲವೂ ವ್ಯರ್ಥವಾಗಿ ಹೋದವು. ಈಗಿನ ಕಾಲದ ಯುವಕರಂತೆ ವಿದ್ಯಾರ್ಥಿದೆಸೆಯಲ್ಲಿ ಲಗ್ನವಾಗುವದು ಉಚಿತವಲ್ಲವೆಂದೂ ಅಥವಾ ಪ್ರೌಢನಾಗಿ ಹೊಟ್ಟೆ ತುಂಬಿಕೊಳ್ಳುವ ಸಾಮರ್ಥ್ಯವು ಬರುವದ

---

* ಪುರಾಣಮಿತ್ಯೇವ ಸಾಧುಸರ್ವಂ।

ಕ್ಕಿಂತ ಮೊದಲೇ ಹೆಂಡಿರು ಮಕ್ಕಳ ಬೇಡಿಯನ್ನು ಕಾಲಲ್ಲಿ ಹಾಕಿಕೊಳ್ಳುವದು ಶ್ರೇಯಸ್ಕರವಲ್ಲವೆಂದೂ ಅವನು ತಿಳಿದಿದ್ದಿಲ್ಲ. 'ಲಗ್ನವನ್ನೇ ಮಾಡಿಕೊಳ್ಳಬಾರದು' ಎಂಬ ದುರಾಗ್ರಹವಾದರೂ ಅವನಲ್ಲಿದ್ದಿಲ್ಲ. ಆದರೆ ಪೌರಾಣಿಕ ರೀತಿಯಂತೆ ನಡೆಯಬೇಕೆಂಬುವದೇ ಅವನ ಮೂಲ ಉದ್ದೇಶವಾಗಿತ್ತು. ಎಂದರೆ ಪ್ರಾಚೀನ ಕಾಲದ ಅಹಲ್ಯಾ, ದ್ರೌಪದೀ, ತಾರಾ, ಸೀತಾ, ಮಂಡೋದರಿಯಂಥ ಕನ್ಯಾರತ್ನಗಳು ಈಗಿನ ಆರ್ಯಾವರ್ತದಲ್ಲಿ ದೊರೆಯಲಾರವು; ಈಗಿನ ಕುಶಿಕ್ಷಣದಿಂದಲೂ, ಭ್ರಷ್ಟವಾದ ಸಮಾಜ ಪದ್ಧತಿಯಿಂದಲೂ ನಿಜ ಆರ್ಯತ್ವದಿಂದ ಪತಿತರಾದ ಈಗಿನ ಕಾಲದ ಸ್ತ್ರೀಯರಿಂದ ಎಂದಿಗೂ ಸುಖಪ್ರಾಪ್ತಿಯು ದೊರೆಯಲಾರದು; ಪ್ರಾಚೀನ ಋಷಿಕಾಲದ ಸ್ತ್ರೀಯರಿಂದಾದಂತೆ ಪತಿಸೇವೆಯು ಪಾಶ್ಚಾತ್ಯ ಶಿಕ್ಷಣದಿಂದ ಕೆಟ್ಟು ಹೋದಂಥ ಸ್ತ್ರೀಯರಿಂದ ಎಂದಿಗೂ ಆಗದು; ಮತ್ತು ಅತಿಥಿ ಅಭ್ಯಾಗತರ ಆದರ ಸತ್ಕಾರವೂ, ಗುರುಜನರ ಮಾನವೂ, ದೇವರ ಪೂಜೆ ಮೊದಲಾದ ಅನೇಕ ಕರ್ಮಗಳೂ ಆಗಲಾರವು. ಈಗಿನ ಕಾಲದ ಸ್ತ್ರೀಯರು ಪ್ರಾಚೀನ ಕಾಲದ ಅನೇಕ ಗೃಹಗಳನ್ನು ವಿಲಾಸ ಮಂದಿರಗಳನ್ನಾಗಿ ಮಾಡಿರುವರು. ಆದ್ದರಿಂದ ಇಂಥ ಭ್ರಷ್ಟ ಕಾಲದಲ್ಲಿ ಪತಿತವಾದ ಸಮಾಜ ಪದ್ಧತಿಯಲ್ಲಿ ಅವಿವಾಹಿತನಾಗಿರುವದೇ ಉತ್ತಮ ಪಕ್ಷವೆಂದು ಕೃಷ್ಣರಾಯನ ಮನವರಿಕೆಯಾಗಿತ್ತು. ಆದ್ದರಿಂದ ಕೃಷ್ಣರಾಯನ ಈ ವಿಚಾರವನ್ನು ತಿರುಗಿಸಲು ಇಂದಿನ ವರೆಗೆ ಯಾರೂ ಸಮರ್ಥರಾಗಿದ್ದಿಲ್ಲ.

ಮಗನ ಈ ಪ್ರಕಾರದ ವಿಕ್ಷಿಪ್ತತನವನ್ನು ನೋಡಿ ತಾಯಿಯಾದ ಸೀತಾಬಾಯಿಯು ಮನದಲ್ಲಿಯೇ ಅತ್ಯಂತವಾಗಿ ಮರುಗಿದಳು.

ಆದರೆ ಅವನ ಹಟದ ಮುಂದೆ ಅವಳ ಪ್ರಯತ್ನವು ನಡೆಯುವ ಹಾಗಿದ್ದಿಲ್ಲ. ಒಂದು ದಿವಸ ಅವನ ತಾಯಿಯು ಬುದ್ಧಿಯನ್ನು ಹೇಳುವಾಗ್ಗೆ, ಅವನು – "ಅವ್ವಾ, ಲಗ್ನದ ವಿಷಯವಾಗಿ ನನ್ನೆದುರಿಗೆ ಮಾತನ್ನೆತ್ತಬೇಡ. ಇನ್ನೊಮ್ಮೆ ಈ ವಿಷಯವನ್ನು ತೆಗೆದರೆ ನಾನು ಸನ್ಯಾಶಿಯಾಗಿ ಮನೆ ಬಿಟ್ಟು ಹೊರಗೆ ಹೋಗುವೆನು" ಎಂದು ಭಯವನ್ನು ಹಾಕಿದ್ದನು. ಆದ್ದರಿಂದಲೇ ಸೀತಾಬಾಯಿಯು ನಿರುಪಾಯಳಾಗಿ ಮರುಗಹತ್ತಿದ್ದಳು.

ವಿಜಾಪುರ ಜಿಲ್ಲೆಯಲ್ಲಿಯೇ ಇದ್ದ ಬಾಗಿಲುಕೋಟೆಯಲ್ಲಿ ನಾರಾಯಣರಾಯರೆಂಬ ಒಬ್ಬ ಸಭ್ಯಗೃಹಸ್ಥರು ವಾಸಿಸುತ್ತಿದ್ದರು. ಅವರಿಗೆ ಮನಮೋಹಿನಿ ಎಂಬ ಹೆಸರಿನ ಅತ್ಯಂತ ಸುಂದರಳಾದ ಒಬ್ಬಳೇ ಮಗಳಿದ್ದಳು. ನಾರಾಯಣರಾಯನ ಮನೆತನದವರಿಗೂ ಕೃಷ್ಣರಾಯನ ಮನೆತನದವರಿಗೂ ಒಂದಿಷ್ಟು ಬಾದರಾಯಣ ಸಂಬಂಧವಿತ್ತು. ನಾರಾಯಣರಾಯರ ಹೆಂಡತಿಯಾದ ರಮಾಬಾಯಿಯ ಮನಸ್ಸಿನಲ್ಲಿ ತನ್ನ ಮಗಳಾದ ಮೋಹಿನಿಯನ್ನು ಕೃಷ್ಣರಾಯನಿಗೆ ಕೊಡಬೇಕೆಂದು ಇತ್ತು. ಮೋಹಿನಿಯ ರೂಪ ಗುಣಗಳನ್ನು ನೋಡಿ ಅವಳನ್ನೇ ತನ್ನ ಸೊಸೆಯನ್ನಾಗಿ ಮಾಡಿಕೊಳ್ಳಬೇಕೆಂಬ ವಿಚಾರವೂ ಸೀತಾಬಾಯಿಯ ಮನಸ್ಸಿನಲ್ಲಿತ್ತು. ಮುಂದೆ ದೀಪಾವಳಿಯ ಸೂಟಿಯಲ್ಲಿ ಕೃಷ್ಣರಾಯನು ಮನೆಗೆ ಬಂದನು ರಮಾಬಾಯಿಯ ಹೇಳಿಕೆಯಂತೆ ಸೀತಾಬಾಯಿಯು ಮಗನ ಮನವನ್ನೊಲಿಸುವದಕ್ಕೆ ಅನೇಕ ರೀತಿಯಿಂದ ಪ್ರಯತ್ನ ಮಾಡಿದಳು. ಆದರೂ ಅವಳ ಪ್ರಯತ್ನವು ಸಿದ್ಧಿಸಲಿಲ್ಲ. ಕಡೆಗೆ ಅವಳು ಮಗನು ತನ್ನ ದೃಢನಿಶ್ಚಯದಿಂದ ತಿರುಗಲಾರದ್ದನ್ನು ನೋಡಿ ಮರುಗಿ—

"ಮಗನೇ ನೀನು ಲಗ್ನವನ್ನು ಮಾಡಿಕೊಳ್ಳದಿದ್ದರೆ ನಿನ್ನೆದುರಿಗೇ ನಾನು ಜೀವವನ್ನು ಬಿಡುವೆನು" ಎಂದು ಕರುಣಾನಿಷ್ಠುರಳಾಗಿ ಹೇಳಿದಳು.

ತಾಯಿಯ ಮಾತುಗಳನ್ನು ಕೇಳಿ ಕೃಷ್ಣರಾಯನು ಒಂದು ದೊಡ್ಡ ಪೇಚಾಟದಲ್ಲಿ ಬಿದ್ದನು. ಹಡೆದ ತಾಯಿಗೆ ದುಃಖ ಕೊಡುವದೂ ಅವನ ಮನಸ್ಸಿಗೆ ದುಃಸಹವಾಗಿ ತೋರಿತು. ಎಷ್ಟಾದರೂ ಅವಳು ಹಡೆದ ತಾಯಿಯು; ಜೋಪಾನ ಮಾಡಿದವಳು; ಇದಲ್ಲದೆ ದೇವ ಸಮಾನಳು; ಅಂಥವಳ ಅಜ್ಞೆಯನ್ನು ಮಾನ್ಯ ಮಾಡುವದೇ ಪುತ್ರನ ಆದ್ಯ ಕರ್ತವ್ಯವು; ಎಂಬಿವೇ ಮೊದಲಾದ ಪ್ರಾಚೀನ ಕಾಲದ ವಿಚಾರಗಳು ಬರುತ್ತಲೇ ಕೃಷ್ಣರಾಯನು ತಾಯಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟು—"ತಾಯಿಯೇ, ನಾನು ಇಷ್ಟು ದಿವಸಗಳವರೆಗೆ ನಿನ್ನ ಮನಸ್ಸಿನ ವಿರುದ್ಧವಾಗಿ ನಡೆದು ನಿನಗೆ ದುಃಖವನ್ನು ಕೊಟ್ಟೆನಾದ್ದರಿಂದ ನನ್ನನ್ನು ಕ್ಷಮಿಸು. ಇನ್ನು ಮುಂದೆ ನಾನು ನಿನ್ನ ಅಜ್ಞೆಯಂತೆಯೇ ವರ್ತಿಸುವೆನು" ಎಂದು ಆಕೆಯನ್ನು ಸಂತೈಸಿದನು.

(೨)

**ಮ**ದುವೆಯ ವಿಷಯವಾಗಿ ಕೃಷ್ಣರಾಯನ ಸಮ್ಮತಿಯು ದೊರೆತದ್ದನ್ನು ನೋಡಿ, ವಾಚಕರು, ಅವನ ಭಾವೀಪತ್ನಿಯ ವಿಷಯವಾಗಿ ವಿಚಾರಗಳೇನಿದ್ದವೆಂಬದನ್ನು ತಿಳಿದುಕೊಳ್ಳುವದಕ್ಕಾಗಿ ಆತುರರಾಗಿರಬಹುದು.

ಒಂದು ದಿವಸ ಗೆಳೆಯರಲ್ಲಿ ವಾದ-ವಿವಾದವು ನಡೆದಾಗ್ಗೆ ಕೃಷ್ಣರಾಯನು ಆವೇಶದಿಂದ—"ಒಂದು ವೇಳೆ ನಾನು ಆ ದುಷ್ಟ ಲಗ್ನವನ್ನು

ಮಾಡಿಕೊಳ್ಳುವ ಪ್ರಸಂಗವು ಬಂದರೆ, ನಾನು **ಕುರೂಪಳೂ, ಕರೇ ನೋಸಡಿಯುಳ್ಳವಳೂ** ಮತ್ತು ಅಶಿಕ್ಷಿತಳೂ ಇದ್ದ ಕನ್ಯೆಯನ್ನೇ ಲಗ್ನವಾಗುವೆನು. ಸುಂದರ ಹಾಗೂ ಸುಶಿಕ್ಷಿತ ಕನ್ನೆಯನ್ನು ಎಂದೂ ವರಿಸೆನು! ಯಾಕಂದರೆ ಸುಂದರ ಸ್ತ್ರೀಯರು ಯಾವಾಗಲೂ ತಮ್ಮ ಒಸಪು-ಒಯ್ಯಾರಗಳಲ್ಲಿಯೇ ವೇಳೆಯನ್ನು ಕಳೆಯುವರು. ಅವರು ತಮ್ಮ ಸೌಂದರ್ಯವನ್ನು ಎರಡನೆಯವರ ಕಣ್ಣಿಗೆ ಬೀಳ ಗೊಡಬೇಕೆಂಬ ಆಶೆಯುಳ್ಳವರಾಗಿರುವದರಿಂದ, ಅವರಿಂದ ಗೃಹ ಕೃತ್ಯದ ಕೆಲಸಗಳು ಎಂದೂ ವ್ಯವಸ್ಥಿತವಾಗಿ ಆಗಲಾರವು. ಇದಲ್ಲದೆ ಅವರಿಗೆ ಮೈಗೆ ಹಚ್ಚಿಕೊಳ್ಳುವ ಉತ್ತಮವಾದ ಸಬಕಾರ ಬೇಕು; ಹೆಚ್ಚು ಕಿಮ್ಮತ್ತಿನ ಘಮಘಮಿಸುವ (ವಾಸನೆಯ) ಎಣ್ಣೆಗಳು ಬೇಕು; ತಲೆಗೆ ಹಚ್ಚಿಕೊಳ್ಳಲು ಕಾಮಿನಿಯಾ ಡಾನ ಆಫ ಬ್ಯೂಟಿ ಮೊದಲಾದ ಸುವಾಸಿಕ ತೈಲಗಳು ಬೇಕು; ಮುಖಕ್ಕೆ ಹಚ್ಚಿ ಕೊಳ್ಳಲು ರೋಜ ಪಾವಡರ ಬೇಕು! ಇದಲ್ಲದೆ ಅನೇಕ ನಮೂನೆಯ ಸುಂದರವಾದ ಸೀರೆಗಳೂ, ಕೋಯಿಮುತ್ತೂರ ಪತ್ತಲಗಳೂ ಬೇಕು! ವಸ್ತ್ರವಡಿವೆಗಳ ಮಾತಂತೂ ಎಷ್ಟು ಹೇಳಿದರೂ ಕಡಿಮೆಯೇ. ಸುಂದರಳಾದ ಕನ್ಯೆಯು ಲಗ್ನವಾಗಲು ಹೇಗೆ ಅಪಾತ್ರಳಿರುವಳೋ, ಅದರಂತೆಯೇ ಸುಶಿಕ್ಷಿತಳಾದ ಕನ್ಯೆಯಾದರೂ ಅಪಾತ್ರಳಿರುವಳು. ಯಾಕಂದರೆ ಕನ್ಯೆಯು ಸ್ವಲ್ಪ ಸುಶಿಕ್ಷಿತಳಿದ್ದರೆ ತೀರಿ ಹೋಯಿತು! ಮನೆಯಲ್ಲಿಯ ಕೆಲಸವು ಗುಡ್ಡದ ಹಾಗೆ ಬಿದ್ದಿದ್ದರೂ ಅದರ ಕಡೆಗೆ ಲಕ್ಷ್ಯ ಕೊಡದೆ ಬರೇ ತನ್ನ ನಾಟಕ ಕಾದಂಬರಿಗಳಲ್ಲಿಯೇ ಮಗ್ನಳಾಗಿರುವಳು ಈಗಂತೂ ಕೆಲವರು ಕಥೆ-ಕಾದಂಬರಿಗಳನ್ನು ಸಹ ಬರೆಯಹತ್ತಿರುವರು! ಕೆಲವರು ತಮ್ಮ ನಾಚಿಕೆಯನ್ನು ಬಿಟ್ಟು ಇಸ್ಪೇಟಿನ ಆಟಗಳನ್ನಾಡುವರು; ಕೆಲವರು ತಮ್ಮ

ಗಂಡಂದಿರಿಗೆ ಕವಿತಾಬದ್ಧವಾದ ಪ್ರೇಮಪತ್ರಿಕೆಗಳನ್ನು ಕಳಿಸುವರು; ಮತ್ತು ಅವರಿಗೆ ಕೂಡ್ರಲಿಕ್ಕೆ ಖುರ್ಚಿಗಳು ಬೇಕು; ಅದವಿ-ಅಂಚಡಿ ಹಾಗೂ ಪುಸ್ತಕಗಳನ್ನಿಡಲು ಅಲ್‌ಮಿರಾ ಕಪಾಟುಗಳು ಬೇಕು; ಅವರ ಸಲುವಾಗಿ ಅವರ ಗಂಡಂದಿರು ದಿನಾಲೂ ಮನೆಗೆ ವರ್ತಮಾನಪತ್ರ, ಮಾಸಿಕ ಪುಸ್ತಕ, ಕಥೆ-ಕಾದಂಬರಿ ಮೊದಲಾದವುಗಳನ್ನು ತರಬೇಕು, ಗಂಡಂದಿರು ತಮ್ಮ ಬಂದ ಪಗಾರವನ್ನು ಅವರ ಕೈಯಲ್ಲಿ ಕೊಡಬೇಕು; ಹೀಗೆ ಅನೇಕ ವಿಧವಾಗಿ ಅವರು ತಮ್ಮ ಗಂಡಂದಿರ ಜೀವಪನ್ನೇ ಹರಣ ಮಾಡುವರು. ಅವರಿಂದ ಮನೆಯ ಕೆಲಸವಂತೂ ಎಂದಿಗೂ ಆಗದು. ಅಡಿಗೆಯನ್ನು ಮಾಡುವ ವೇಳೆಯು ಬಂದರೂ, ಅವರು ಒಂದು ಕೈಯಲ್ಲಿ ಸೂಪಶಾಸ್ತ್ರದ ಪುಸ್ತಕವನ್ನೂ, ಮತ್ತೊಂದು ಕೈಯಲ್ಲಿ ಊದುಗೊಳವೆಯನ್ನೂ ಹಿಡಿದುಕೊಂಡು ಒಲೆಯ ಮುಂದೆ ಅನ್ನಪೂರ್ಣಾದೇವಿಯಂತೆ ಕೂಡ್ರುವರು! ಅವರಿಗೆ ಉತ್ತಮವಾದ ಅಡಿಗೆಯನ್ನು ಮಾಡಲಿಕ್ಕೆ ಬರುತ್ತಿದ್ದರೆ, ಈ ದೇಶದಲ್ಲಿಯ ಮಂಗಳೂರು ಹಾಗೂ ಉಡುಪಿಯ ಬ್ರಾಹ್ಮಣರು ಎಂದೋ ತಮ್ಮ ದೇಶಕ್ಕೆ ಹೋಗುತ್ತಿದ್ದರು! ಅವರಿಗೆ ವ್ರತ ನಿಯಮಗಳ ಮಾತಂತೂ ಕನಸಿನಲ್ಲಿ ಸಹ ಕಂಡುಬರುವದಿಲ್ಲ! ಆದ್ದರಿಂದ ಪ್ರತಿಯೊಬ್ಬನು ಸುಂದರ ಹಾಗೂ ಸುಶಿಕ್ಷಿತ ಸ್ತ್ರೀಯನ್ನು ಮದುವೆಯಾಗದೆ, ಅಶಿಕ್ಷಿತ ಹಾಗೂ ಕುರೂಪಳಾದ ಸ್ತ್ರೀಯನ್ನೇ ಮದುವೆಯಾಗಬೇಕು. ಆದರೆ ಎಷ್ಟೋ ಜನರು ಮೇಲಿನ ರೂಪಕ್ಕೆ ಮರುಳಾಗಿ ಮದುವೆ ಮಾಡಿಕೊಂಡು ಹಿಂದುಗಡೆ ಪಶ್ಚಾತ್ತಾಪಪಡುವದು ಬಹು ದುಃಖದ ಸಂಗತಿಯು. ಆದ್ದರಿಂದ ನಾನು ಇಂಥ ಅವಿಚಾರವನ್ನೇ ಮಾಡೆನು. **ಲಗ್ನ ಮಾಡಿಕೊಳ್ಳುವದಾದರೆ**

ಕರೇ ಮುಖದ ಹಿಡಂಬಿಯಂಥ ಕನ್ಯೆಯನ್ನೇ ಮಾಡಿ ಕೊಳ್ಳುವೆನು ”.

ಕೃಷ್ಣರಾಯನ ಇಂಥ ಆವೇಶದ ಭಾಷಣವನ್ನು ಕೇಳಿ ಅವನ ಮಿತ್ರನೊಬ್ಬನು—“ ಮಹಾರಾಜರೇ, ಬಾಯಿಂದ ಮಾತಾಡುವದು ಅತಿ ಸುಲಭ! ಆದರೆ ಕೃತಿಯಿಂದ ಮಾಡಿ ತೋರಿಸುವದು ಕಠಿಣವು. ಆದ್ದರಿಂದ ನೀನು ಮೊದಲು ಕುರೂಪ ಸ್ತ್ರೀಯಳನ್ನು ಮದುವೆಯಾಗಿ ಆ ನಂತರ ವ್ಯಾಖ್ಯಾನವನ್ನು ಹೇಳು ” ಎಂದು ಅವನಿಗೆ ಚೇಷ್ಟೆ ಮಾಡಿದನು.

ಮಿತ್ರನ ಮಾತುಗಳನ್ನು ಕೇಳಿ ಕೃಷ್ಣರಾಯನು ಸಿಟ್ಟಿನಿಂದ “ ನಿನ್ನಂಥ, ಅಡಿ ಮಾಡದ ಸುಧಾರಕನು ನಾನಲ್ಲ. ನಾನು ಹೇಳಿದಂತೆಯೇ ಕೃತಿಯನ್ನು ಮಾಡಿ ತೋರಿಸುವೆನು. ಒಂದು ವೇಳೆ ನನಗೆ ಕುರೂಪ ಕನ್ಯೆಯು ದೊರೆಯದೇ ಹೋದರೆ ನಾನು ಆಜನ್ಮ ಅವಿವಾಹಿತನಾಗಿಯೇ ಇರುವೆನು! ”

(೩)

ದೀಪಾವಳಿಯಲ್ಲಿ ಒಂದು ದಿವಸ ಕೃಷ್ಣರಾಯನ ಫಲಾಹಾರವು ನಡೆದಿತ್ತು. ಆಗ ಅವನ ತಾಯಿಯು ಬಂದು—“ ಇನ್ನೊಂದೆರಡು ಚಕ್ಕುಲಿ ಉಂಡಿಗಳನ್ನು ತರಲ್ಯಾ ” ಎಂದು ಕೇಳಿದಳು.

ಆ ವೇಳೆಯಲ್ಲಿ ಕೃಷ್ಣರಾಯನ ಲಕ್ಷ್ಯವು ಫಲಾಹಾರದ ಕಡೆಗಿರದೆ ಬೇರೇ ಕಡೆಗೆ ಹೋಗಿತ್ತು. ಅವನು ಒಮ್ಮಿಂದೊಮ್ಮೆ— “ ತಾಯಿಯೇ, ನಾನು ಮೊದಲು ಕನ್ಯೆಯನ್ನು ನೋಡಿ ನನ್ನ ಮನಸ್ಸಿಗೆ ಬಂದವಳನ್ನೇ ಮದುವೆಯಾಗುವೆನು ” ಎಂದು ನುಡಿದನು.

ಮಗನ ಮುಖದಿಂದ ಹೊರಟ ಮಾತುಗಳನ್ನು ಕೇಳಿ, ಸೀತಾಬಾಯಿಯು ಆನಂದಿತಳಾಗಿ ಹೇಳಿದಳು—“ ಮಗನೇ, ಹಾಗೇ ಮಾಡು. ನಿನಗಾರು ಬೇಡವೆನ್ನುವರು? ನಮ್ಮ ಅಪ್ತರಾದ ನಾರಾಯಣರಾಯರ ಮನೆಯಲ್ಲಿ ಒಬ್ಬ ಹುಡುಗೆಯಿರುವಳು. ಅವಳ ವಯಸ್ಸಾದರೂ ಹದಿಮೂರಕ್ಕೆ ಮೀರಿರಬಹುದು. ಹುಡುಗಿಯಂತೂ ಪ್ರತ್ಯಕ್ಷ ರತಿದೇವಿಯೇ ಆಗಿರುವಳು ”.

ಕೃಷ್ಣರಾಯನು ನಡುವೇ ಬಾಯಿ ಹಾಕಿ “ ಅವಳು ಸುಂದರಳಿರುವಳೋ?” ಎಂದನು. ಸೀತಾಬಾಯಿಯು ಆನಂದದಿಂದ—“ ಹೌದು, ಅತ್ಯಂತ ಸುಂದರಳಿರುವಳು. ಸಾವಿರ ಕನ್ಯೆಗಳು ಬಂದರೂ ಅಂಥ ಕನ್ಯೆಯು ನಮಗೆ ಎಂದೂ ದೊರೆಯದು. ಗುಲಾಬೀ ಬಣ್ಣವನ್ನು ಧಿಃಕರಿಸುವ ಆಕೆಯ ಮುಖವೂ, ಅವಳ ಕೋಮಲವಾದ ಅವಯವಗಳೂ ನಿನ್ನ ಮನಸ್ಸನ್ನು ಆಕರ್ಷಿಸದೆ ಇರಲಾರವು. ಇದಲ್ಲದೆ ಅವಳಿಗೆ ಚನ್ನಾಗಿ ಓದಲಿಕ್ಕೂ ಬರೆಯಲಿಕ್ಕೂ ಬರುವದು- ಅಂಗ್ಲ ಭಾಷೆಯಲ್ಲಿ ಸಹ ಅವಳು ಪ್ರವೀಣಳಿರುವಳೆಂದು ಕೇಳಿರುವೆನು. ಅದ್ದರಿಂದ ಅವಳನ್ನೇ ನೀನು ಮದುವೆಯಾಗು ”.

ಕೃಷ್ಣರಾಯನು ತಾಯಿಯ ಮಾತುಗಳನ್ನು ಕೇಳಿ ನಿಟ್ಟುಸಿರನ್ನು ಬಿಟ್ಟು—“ ತಾಯಿಯೇ, ನಾನು ಆ ಕನ್ಯೆಯನ್ನು ಎಂದಿಗೂ ವರಿಸೆನು ” ಎಂದು ಒಮ್ಮೆಲೇ ಹೇಳಿ ಬಿಟ್ಟನು.

ಸೀತಾಬಾಯಿಯು ಚಕಿತಳಾಗಿ ಕೇಳಿದಳು—“ ಮಗನೇ, ಅಂಥ ಕನ್ಯೆಯಲ್ಲಿ ಯಾವ ಕುಂದನ್ನು ತೆಗೆಯುವಿ? ನಾನು ನಿನ್ನೆದುರಿಗೆ

ಇಲ್ಲದ ಸುದ್ದಿಯನ್ನು ಹೇಳುವದಿಲ್ಲ. ನಾನು ಪ್ರತ್ಯಕ್ಷವಾಗಿ ನನ್ನ ಕಣ್ಣುಗಳಿಂದ ಆ ಹುಡುಗೆಯನ್ನು ನೋಡಿದ್ದೇನೆ. ಅವಳು ನಾನು ವರ್ಣನೆ ಮಾಡಿದಂತೆ ಸುಂದರಳೇ ಇರುವಳು. ಆದ್ದರಿಂದ 'ನೀನಾದರೂ ಅವಳನ್ನು ನೋಡಿ ನಿನ್ನ ಮನಸ್ಸಿನ ನಿಶ್ಚಯ ಮಾಡಿಕೋ".

ಕೃಷ್ಣರಾಯನು—"ಸುಂದರ ಹಾಗೂ ಸುಶಿಕ್ಷಿತ ಕನ್ಯೆಯನ್ನು ನಾನು ಎಂದೂ ವರಿಸೆನು".

ಮಗನ ಮಾತುಗಳನ್ನು ಕೇಳಿ ಸೀತಾಬಾಯಿಗೆ ಸ್ವಲ್ಪ ಸಿಟ್ಟು ಬಂತು. ಆಗ ಅವಳು—"ಹಾಗಾದರೆ ನೀನು ಒಂದು **ಕರೇ ಮೊಸಡಿಯ** (ಮುಖದ) **ಮಂಗನನ್ನು ಮದುವೆಯಾಗುವೆಯೋ?"**

ಕೃಷ್ಣರಾಯನು ಗಂಭೀರ ರೀತಿಯಿಂದ—"ಹೌದು, ನಾನು ಕರೇ ಬಣ್ಣದಿಂದ ಒಪ್ಪುವವಳೂ, ಕುರೂಪಿಯೂ ಆದ ಸ್ತ್ರೀಯಳನ್ನೇ ಮದುವೆಯಾಗುವೆನು".

ಸೀತಾಬಾಯಿಯು ಸಿಟ್ಟಿನಿಂದ ಕೇಳಿದಳು—"ಅವಲಕ್ಷಣ ರಂಡೆಗಂಡಾ, ಇದನ್ನ್ಯಾರು ಹೇಳಿದರು ನಿನಗೆ? ಇಂಥ ಸುಂದರ ಹಾಗೂ ಸುಶಿಕ್ಷಿತ ಕನ್ಯೆಯು ದೊರೆಯುವದು ಎಲ್ಲರ ದೈವದಲ್ಲಿರುವದಿಲ್ಲ; ತಿಳಿಯಿತೇ?"

ಕೃಷ್ಣರಾಯನು—"ಎಲ್ಲ ಜನರ ಮಾತನ್ನು ನಾನು ಕೇಳುವದಿಲ್ಲ. ನಾನು ಕುರೂಪ ಸ್ತ್ರೀಯಳನ್ನೇ ಲಗ್ನವಾಗುವೆನು".

ಕೃಷ್ಣರಾಯನ ಮುಖವು ಆ ವೇಳೆಯಲ್ಲಿ ಆನಂದದಿಂದ ಪ್ರಫುಲ್ಲಿತವಾಯಿತು. ಯಾಕಂದರೆ ಅವನು ಇತರರಂತೆ ವಿಲಾಸ ಸುಖದ

ಸಲುವಾಗಿಯೇ ಲಗ್ನವನ್ನು ಮಾಡಿಕೊಳ್ಳುವದಿದ್ದಿಲ್ಲ. ಅವನ ಲಗ್ನದ ಕಲ್ಪನೆಯು ಉದಾತ್ತವಾಗಿತ್ತು. ಅವನಿಗೆ ಋಷಿ ಕಾಲೀನಿನ ಸಮಾಜ ಸ್ಥಿತಿಯನ್ನೂ ಮತ್ತು ಋಷಿ ಕಾಲೀನ ಗೃಹಧರ್ಮವನ್ನೂ ಪುನಃ ಆಚಾರದಲ್ಲಿ ತರಬೇಕಾಗಿತ್ತು.

ಪಾಪ! ಆ ಸೀತಾಬಾಯಿಗೆ ಮಗನ ಇಂಥ ವಿಚಾರಗಳು ಹೇಗೆ ಗೊತ್ತಾಗಬೇಕು? ಮಗನ ಈ ತರದ ಸ್ವಭಾವವು ದಿನ ದಿನಕ್ಕೆ ಹೆಚ್ಚಾಗುತ್ತ ನಡೆದದ್ದನ್ನು ನೋಡಿ ಅವಳಿಗೆ ಅತ್ಯಂತ ದುಃಖವಾಯಿತು. ತಾಯಿಯ ಅಜ್ಞಾನವನ್ನು ದೂರ ಮಾಡಲು, ಕೃಷ್ಣರಾಯನು ಬಹಳ ಪ್ರಯತ್ನ ಮಾಡಿ ನೋಡಿದನು. ಋಷಿ ಕಾಲೀನ ಸ್ತ್ರೀಯರ ಚರಿತ್ರೆಯನ್ನು ಹೇಳಿ ನೋಡಿದನು; ಈಗಿನ ಕಾಲದ ಯುವತಿಯರ ಚರಿತ್ರೆಯನ್ನೂ ಹೇಳಿ ನೋಡಿದನು. ಆದರೆ ಆ ಸೀತಾಬಾಯಿಗೆ ಇವನ ವಿಚಾರಗಳು ಹೇಗೆ ಪಕ್ಕವಾಗಿ ತೋರಬೇಕು? ಎಷ್ಟು ಮಾಡಿದರೂ ಸೀತಾಬಾಯಿಯು ಹೆಂಗಸು. 'ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ' ಎಂಬಂತೆ ಆಕೆಯ ಸ್ಥಿತಿಯಾಗಿತ್ತು. ಕಡೆಗೆ ಅವನು—"ತಾಯಿಯೇ, ನಿನ್ನ ಆಗ್ರಹದ ಮೂಲಕವಾಗಿಯೇ ನಾನು ಲಗ್ನ ಮಾಡಿಕೊಳ್ಳುವದನ್ನು ನಿಶ್ಚಯಿಸಿದೆನು. ಆದರೆ ನಾನು ಕುರೂಪಳಾದ ಸ್ತ್ರೀಯಳನ್ನೇ ವರಿಸುವೆನು. ಪೂರ್ವ ದಿಕ್ಕಿನಲ್ಲಿ ಹುಟ್ಟುವ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಒಂದು ವೇಳೆ ಹುಟ್ಟಿದರೂ, ನಾನು ನನ್ನ ಪ್ರತಿಜ್ಞೆಯನ್ನು ಭಂಗ ಮಾಡಲಾರೆನು" ಎಂದು ಹೇಳಿ ಬಿಟ್ಟನು.

( ೪ )

ಇವತ್ತಿನ ದಿವಸ ಸೀತಾಬಾಯಿಯು ರಮಾಬಾಯಿಗೆ ಭೆಟ್ಟಿಯಾಗಬೇಕೆಂದು ಬಾಗಿಲುಕೋಟೆಗೆ ಬಂದಿದ್ದಳು. ರಮಾಬಾಯಿಯು

ಸೀತಾಬಾಯಿಯು ಸ್ವಾಗತವನ್ನು ಆತ್ಯಾದರದಿಂದ ಮಾಡಿದಳು. ಮೊದಲು ಕ್ಷೇಮಸಮಾಚಾರದ ಪ್ರಶ್ನೆಗಳಾದ ಬಳಿಕ ರಮಾಬಾಯಿಯು ಉತ್ಸುಕತೆಯಿಂದ ಕೇಳಿದಳು—"ಕೃಷ್ಣರಾಯನು ಲಗ್ನ ಮಾಡಿಕೊಳ್ಳುವದಕ್ಕೆ ತನ್ನ ಒಪ್ಪಿಗೆಯನ್ನಿತ್ತನೋ?"

ಸೀತಾಬಾಯಿಯು—"ಏನು ಹೇಳಬೇಕು? ರಮಾಬಾಯಿ, ನನ್ನ ಹಾಡನ್ನು! ಇಷ್ಟು ದಿವಸಗಳತನಕ ಲಗ್ನವನ್ನೇ ಮಾಡಿಕೊಳ್ಳುವದಿಲ್ಲೆಂದು ಹಟ ಹಿಡಿದಿದ್ದನು. ಆದರೆ ಈಗ ಲಗ್ನ ಮಾಡಿಕೊಳ್ಳುವದಕ್ಕೆ ತನ್ನ ಸಮ್ಮತಿಯನ್ನು ಕೊಟ್ಟರೂ ಈಗ ಮತ್ತೊಂದು ಅವನ ತಲೆಯಲ್ಲಿ ಹೊಕ್ಕಿರುವದು".



ರಮಾಬಾಯಿ—"ಅವನು ಅನ್ನುವದಾದರೂ ಏನು?"

ಸೀತಾಬಾಯಿ—'ಕನ್ಯೆಯನ್ನು ತಾನೇ ಸ್ವತಃ ನೋಡುವೆನೆಂದು ಮೊದಲು ಹೇಳಿದನು. ಅದಕ್ಕೆ ನಾನಾದರೂ ಒಪ್ಪಿದೆನು. ಯಾಕೆಂದರೆ ಲಗ್ನವೆಂದರೆ ಜನ್ಮದ ಗಂಟು. ತಾನಾಗಿಯೇ ಕನ್ಯೆಯನ್ನಾರಿಸುವದು ಉತ್ತಮ ಪಕ್ಷವೆಂದು ನಾನು ತಿಳಿದೆನು. ಆಗ ನಾನು—"ನೆಟ್ಟಗಾಯಿತು. ನೀನೇ ಕನ್ಯೆಯನ್ನು ನೋಡು. ನಮ್ಮ ನಾರಾಯಣರಾಯರ ಮನೆಯಲ್ಲಿ ಸುಂದರ ಹಾಗೂ ಸುಶಿಕ್ಷಿತಳಾದ ಒಬ್ಬ ಕನ್ಯೆಯಿರುವಳು. ಅವಳನ್ನು ನೀನೊಮ್ಮೆ ನೋಡಿ ಬಾ" ಎಂದೆನು. ನನ್ನ ಮಾತುಗಳಿಗೆ ಅವನು—'ಸುಂದರ ಹಾಗೂ ಸುಶಿಕ್ಷಿತ ಕನ್ಯೆಯನ್ನು ನಾನೆಂದಿಗೂ ಮದುವೆಯಾಗಲಾರೆನು! ಮತ್ತು ಕರೇ ಬಣ್ಣದ ಕುರೂಪಳಾದ ಸ್ತ್ರೀಯನ್ನೇ ನನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳುವೆನು' ಎಂದನು. ಈಗ ಆ ಹುಚ್ಚನಿಗೇನು ಮಾಡಬೇಕು?"

ರಮಾಬಾಯಿಯು ವಿಸ್ಮಿತಳಾಗಿ—"ನಾನು ಇಂಥ ಸಂಗತಿಯನ್ನು ಎಲ್ಲಿಯೂ ಕೇಳಿಲ್ಲ. ಇಂಥ ಹುಚ್ಚುತನವು ಅವನ ತಲೆಯಲ್ಲಿ ಸೇರಲು ಕಾರಣವೇನು?"

ಆಗ ಸೀತಾಬಾಯಿಯು ಮುಗಸು ತವೇಶದಿಂದ ಹೇಳಿದ ವಿಚಾರಗಳನ್ನೂ ಕಲ್ಪನೆಗಳನ್ನೂ ತನಗೆ ತಿಳಿದಷ್ಟು ಪುಟ್ಟಿಗೆ ರಮಾಬಾಯಿಗೆ ಹೇಳಿದಳು. ರಮಾಬಾಯಿಯು ಸ್ವಲ್ಪ ವೇಳೆ ವಿಚಾರ ಮಾಡುತ್ತ, ಅಲ್ಲಿಯೇ ಕುಳಿತುಕೊಂಡು ಬಿಟ್ಟಳು. ಆ ಬಳಿಕ ಅವಳು—"ಹೀಗೇನು? ಸೀತಾಬಾಯೀ, ನೀನು ಒಂದು ಕೆಲಸವನ್ನು ಮಾಡು. ಊರಿಗೆ ಹೋಗುತ್ತಲೇ ಅವನಿಗೆ ಬೇಕಾದಂಥ ಕರೇ ಬಣ್ಣದ ಕುರೂಪಳಾದ ಕನ್ಯೆಯನ್ನೇ ನೋಡಿ ಬಂದಿರುವೆನೆಂದು ಹೇಳು. ಮತ್ತು ಆ ಕನ್ಯೆಯನ್ನು ನೋಡುವದರ ಸಲುವಾಗಿ ಅವನನ್ನು ಬರುವ ಆದಿತ್ಯವಾರ ದಿವಸ ಇಲ್ಲಿಗೆ ಕಳಿಸಿಕೊಡು. ಮುಂದಿನ ವ್ಯವಸ್ಥೆಯನ್ನೆಲ್ಲ ನಾನೇ ಮಾಡುವೆನು".

ಇಷ್ಟಾದ ಬಳಿಕ ಅವರಿಬ್ಬರಲ್ಲಿ ಸ್ವಲ್ಪ ಹೊತ್ತಿನವರೆಗೆ ಕಿವಿಯ ಸಂಭಾಷಣೆಯೂ ನಡೆಯಿತು. ಸೀತಾಬಾಯಿಯು ರಮಾಬಾಯಿಯ ಮಾತಿಗೊಪ್ಪಿದಳು. ಮನಮೋಹಿನಿಯನ್ನು ಒಮ್ಮೆ ನೋಡಿದ ಬಳಿಕ ಕೃಷ್ಣರಾಯನು ಅವಳ ಸಂಗಡ ವಿವಾಹದ ಸಲುವಾಗಿ ಎಂದಿಗೂ ಅಸಮ್ಮತನಾಗನೆಂದು ಸೀತಾಬಾಯಿಯ ಮನವರಿಕೆಯಾಗಿತ್ತು. ಮುಂದೆ ಎರಡನೇ ದಿವಸವೇ ಸೀತಾಬಾಯಿಯು ರಮಾಬಾಯಿಯ ಅಪ್ಪಣೆ ಪಡಕೊಂಡು ತನ್ನ ಊರಿಗೆ ಹೊರಟು ಹೋದಳು.

## ( ೫ )

**ತಾ**ಯಿಯ ಆಜ್ಞೆಯಂತೆ ಕೃಷ್ಣರಾಯನು ತನ್ನ ಭಾವೀ ಪತ್ನಿಯನ್ನು ನೋಡುವದರ ಸಲುವಾಗಿ ಮನಮೋಹಿನಿಯ ಮನೆಗೆ

ಬಂದನು. ಆ ವೇಳೆಯಲ್ಲಿ ನಾರಾಯಣರಾಯರು ಮನೆಯಲ್ಲಿದ್ದಿಲ್ಲ. ಮನೆಯ ಅಂಗಳದಲ್ಲಿ ಆಡುತ್ತಿದ್ದ ೮–೯ ವರ್ಷ ವಯಸ್ಸಿನ ಒಬ್ಬ ಹುಡುಗನು ಕೃಷ್ಣರಾಯನ ಸ್ವಾಗತವನ್ನು ಬಹು ಆದರ ಸತ್ಕಾರದಿಂದ ಮಾಡಿದನು. ಅವನು ಮನಸೋಹಿಸಿಯು ತನ್ನ ಸಾಗಿದನು. ಸ್ವಲ್ಪ ಹೊತ್ತಿನ ಮೇಲೆ ಒಬ್ಬ ಹೆಂಗಸು ತುಂಬಿದ ತಂಬಿಗೆಯನ್ನು ತೆಗೆದುಕೊಂಡು ಬಂದು—"ಕೈಕಾಲು ತೊಳೆದುಕೊಂಡು ಒಳಗೆ ಬನ್ನಿ" ಎಂದು ಹೇಳಿ ನಗುತ್ತ ಒಳಗೆ ಹೋದಳು. ಕೃಷ್ಣರಾಯನು ಕೈಕಾಲುಗಳನ್ನು ತೊಳೆದುಕೊಂಡು ತನ್ನ ಭಾವೀ ಜೀಗನೊಂದಿಗೆ ಒಳಗಿನ ಕೋಣೆಯಲ್ಲಿ ಹೋಗಿ ಕುಳಿತನು. ಅವನು ಕೋಣೆಗೆ ಹೋಗುವ ಮುಂದೆ ಎಡಬಲದಲ್ಲಿ ಜನರು ನಗುವ ಸಪ್ಪಳವೂ ಅವನ ಕಿವಿಗೆ ಬಿತ್ತು. ಆದರೆ ಅವನಿಗೆ ನಗೆಯ ಕಾರಣವು ತಿಳಿಯಲಿಲ್ಲ. ಮುಂದೆ ಫಲಾಹಾರಗಳಿಂದ ತುಂಬಿದ ಎರಡು ತಾಟುಗಳು ಇಡಲಟ್ಟವು. ಇತ್ತ ಫಲಾಹಾರವು ನಡೆದ ವೇಳೆಯಲ್ಲಿ ಒಳಗಿನಿಂದ ರುಮ್ ಝುಮ್ ಎಂಬ ಸಪ್ಪಳವು ಕೇಳಬರಹತ್ತಿತು. ಆಗ ಕೃಷ್ಣರಾಯನು ಸ್ವಲ್ಪ ಮುಖವೆತ್ತಿ ನೋಡಲು ಎದುರಿಗೆ ಹನ್ನೆರಡು ಹದಿಮೂರು ವರ್ಷದ ಬಾಲಿಕೆಯೊಬ್ಬಳು ಬರುತ್ತಿರುವದನ್ನು ಕಂಡನು. ಆ ಬಾಲಿಕೆಯು ಬಂದವಳೇ ಕೃಷ್ಣರಾಯನ ಎದುರಿನಲ್ಲಿ ಕುಳಿತುಬಿಟ್ಟಳು. ಕೃಷ್ಣರಾಯನು ಮುಖವನ್ನು ಕೆಳಗೆ ಮಾಡಿದನು. ಮತ್ತು ನಡುನಡುವೆ ಅವನು ತನ್ನ ಭಾವೀ ಪತ್ನಿಯ ಕಡೆಗೆ ನೋಡುತ್ತಿದ್ದನು. ಆ ಬಾಲಿಕೆಯ ಬಣ್ಣವು ಕಾಗೆಯ ಬಣ್ಣವನ್ನು ಸಹ ನಾಚಿಸುತ್ತಿತ್ತು. ಮುಖದ ಮೇಲೆ ಬಿದ್ದ ಎಣ್ಣೆಯಿಂದ ಬಸಿಯುತ್ತಿರುವ ಕೂದಲುಗಳ ಕೆಟ್ಟ ವಾಸನೆಯು ಆ ಕೋಣೆಯ ತುಂಬೆಲ್ಲ

ಅಡಗಿತು. ಅವಳ ಗಲ್ಲಗಳು ಎತ್ತರವಾಗಿದ್ದವು. ಮೂಗು ಚಪ್ಪಟೆಯಾಗಿತ್ತು. ಮುಖದ ಮೇಲೆಲ್ಲ ಮೈಲಿಯ ಕಲೆಗಳಿದ್ದವು. ತುಟಿಗಳು ದೊಡ್ಡವಿದ್ದು, ಕಪ್ಪು ಬಣ್ಣದಿಂದ ಒಪ್ಪುತ್ತಿದ್ದವು. ಮೇಲಿನ ಎರಡು ಹಲ್ಲುಗಳು ಹೊರಗೆ ಕಾಣುತ್ತಿದ್ದ (ಹಾದಿದ್ದ) ವು. ತನಗೆ ಒಪ್ಪುವಂಥ ಕರೇ ಬಣ್ಣದ ಸೀರೆಯನ್ನೇ ಉಟ್ಟಿದ್ದಳು. ಮೈಯಲ್ಲಿ ಅದೇ ಬಣ್ಣದ ದಿಪ್ಪನ್ನ ಕುಪ್ಪಸವನ್ನು ತೊಟ್ಟಿದ್ದಳು. ತಲೆಯ ಮೇಲೆ ದೊಡ್ಡ ದೊಡ್ಡ ಸೇವಂತಿಗೆಯ ಹೂವುಗಳು ಒಪ್ಪುತ್ತಿದವು. ಕನ್ಯೆಯ ರೂಪವನ್ನೂ ಸೌಂದರ್ಯವನ್ನೂ ಕೃಷ್ಣರಾಯನು ನೋಡಿ, ಮನದಲ್ಲಿ –"ನನ್ನ ಮನಸ್ಸಿನ ತಕ್ಕಂತೆಯೇ ಈ ಹುಡುಗಿಯಿರುವಳು" ಎಂದಂದುಕೊಂಡು ಗಂಭೀರ ರೀತಿಯಿಂದ – "ನಿನ್ನ ಹೆಸರೇನು?" ಎಂದು ಆಕೆಗೆ ಪ್ರಶ್ನೆ ಮಾಡಿದನು.

ಕನ್ಯೆಯು ಕೃಷ್ಣರಾಯನ ಮುಖವನ್ನು ನೋಡುತ್ತ ನಾಲಿಗೆಯನ್ನು ಹೊರಗೆ ತೆಗೆದು "ಆ?" ಎಂದಳು.

ಕೃಷ್ಣರಾಯನು ಪುನಃ – "ನಿನ್ನ ಹೆಸರೇನು?"

ಕನ್ಯೆಯು—"ಜಗದಂಭಾ".

ಇಷ್ಟರಲ್ಲಿ ಬಾಗಿಲದ ಹತ್ತರ ನಿಂತಿದ್ದ ಒಬ್ಬ ವೃದ್ಧ ಸ್ತ್ರೀಯೂ ಕೃಷ್ಣರಾಯನ ಭಾವೀ ಬೀಗನೂ ಜಗದಂಬೆಯ ಕಡೆಗೆ ಕೆಟ್ಟಗಣ್ಣಿನಿಂದ ನೋಡಿದರು. ಕೂಡಲೇ ಆ ಕನ್ಯೆಯು "ಮನಮೋಹಿನಿ" ಎಂದು ಅಂದಳು.

ಆಗ ಭಾವೀ ಬೀಗನು—"ಮೊದಲು ಈಕೆಯ ಹೆಸರು ಜಗದಂಬೆಯೆಂದು ಇಟ್ಟಿದ್ದರು. ಆದರೆ ಎಲ್ಲರೂ ಈಗ ಮನಮೋಹಿನಿಯೆಂದೇ ಕರೆಯುವರು".

ಕೃಷ್ಣರಾಯನಿಗೆ ಮನಮೋಹಿನಿಯೆಂಬ ಹೆಸರು ರುಚಿಸಲಿಲ್ಲ. ಅವನು ತನ್ನೊಳಗೆ—“ಮೊದಲಿನ ಹೆಸರನ್ನು ಈಗ ಬದಲು ಮಾಡಿದ್ದೇ ತಪ್ಪಾಗಿರುವದು. ಮನಮೋಹಿನಿಯೆಂಬ ಹೆಸರಿಗಿಂತ ಜಗದಂಬಾಯೆಂಬ ಹೆಸರು ಎಷ್ಟು ಸುಂದರವಾಗಿರುವದು. ಲಗ್ನವಾದ ನಂತರ ನಾನು ಇದೇ ಹೆಸರನ್ನು ಇಡುವೆನು”.

'ಆ ಮೇಲೆ ಕೃಷ್ಣರಾಯನು ಎರಡನೆಯ ಪ್ರಶ್ನೆಯನ್ನು ಮಾಡಿದನು—“ನೀನು ಎಲ್ಲಿಯವರೆಗೆ ಕಲಿತಿರುವಿ?”

ಜಗದಂಬೆಯು ಮೊದಲಿನಂತೆ ನಾಲಿಗೆಯನ್ನು ಚಾಚಿ—“ಆ?”

ಕೃಷ್ಣರಾಯನು—“ನಿನ್ನ ಅಭ್ಯಾಸವು ಎಲ್ಲಿಯವರೆಗೆ ಆಗಿರುವದು?”

ಜಗದಂಬೆ—“ಇಲ್ಲ”.

ಜಗದಂಬೆಯು ಮತ್ತೆ ಮಾತಾಡುವವಳಿದ್ದಳು. ಆದರೆ ಹತ್ತಿರಿದ್ದ ಸ್ತ್ರೀಯು ಅವಳನ್ನು ಕೆಟ್ಟುಗಣ್ಣಿನಿಂದ ನೋಡಿದ್ದರಿಂದ ಅಷ್ಟಕ್ಕೇ ಬಿಟ್ಟಳು. ತನ್ನ ಭಾವೀ ಪತ್ನಿಗೆ ಆಂಗ್ಲ ಶಿಕ್ಷಣದ ಗಂಧವೂ ಕೂಡ ತಗಲದೇ ಇದ್ದುದನ್ನು ನೋಡಿ ಕೃಷ್ಣರಾಯನು ಮನದಲ್ಲಿ ಹಿರಿಹಿರಿ ಹಿಗ್ಗಿದನು. ಇದಲ್ಲದೆ ಅವಳು ಕುರೂಪಿಯೂ ಆಗಿದ್ದಳು. ನಿಜವಾದ ಆರ್ಯ ಗೃಹಿಣಿಯಾಗಲಿಕ್ಕೆ ಅವಳು ತಕ್ಕವಳಿರುವಳೆಂದು ಅವನ ಮತವಾಯಿತು. ಕಡೆಗೆ ಅವನು—“ನೀನು ಇನ್ನು ಒಳಗೆ ಹೋಗು” ಎಂದನು.

ಜಗದಂಬೆಯು ಪುನಃ ನಾಲಿಗೆಯನ್ನು ಹಿರಿದು—“ಆ?”

ಆ ಮೇಲೆ ಹೊರಗಿದ್ದ ಒಬ್ಬ ಸ್ತ್ರೀಯು ಅವಳನ್ನು ಕರೆದುಕೊಂಡು ಹೋದಳು.

ಇತ್ತ ತಾಟಿನಲ್ಲಿಯು ಫಲಾಹಾರದ ಪದಾರ್ಥಗಳೆಲ್ಲ ತೀರಿ ಹೋಗುತ್ತ ಬಂದಿದ್ದವು. ಸ್ವಲ್ಪ ವೇಳೆಯಲ್ಲಿಯೇ ಹದಿಮೂರು ಹದಿನಾಲ್ಕು ವರ್ಷದ ಸುಂದರಳಾದ ಹುಡುಗಿಯು ಚಹದ ಎರಡು ಪೇಲೆಗಳನ್ನು ತೆಗೆದುಕೊಂಡು ಅಲ್ಲಿಗೆ ಬಂದಳು. ಅವಳ ಅವಯವಗಳು ಸುಂದರವಾಗಿ ಚಿತ್ರಿಸಿದಂತೆ ಕಾಣುತ್ತಿದ್ದವು. ಮುಖವು ಅತ್ಯಂತ ಮೋಹಕವಾಗಿತ್ತು. ಇದಲ್ಲದೆ ತೆಳ್ಳಗಿನ ಕೋಯಿಮುತ್ತೂರ ರೇಸಿಮೆಯ ಪತ್ತಲವನ್ನು ಉಟ್ಟಿದ್ದರಿಂದ ಅವಳು ಮತ್ತಿಷ್ಟು ಸುಂದರಳಾಗಿ ಕಾಣುತ್ತಿದ್ದಳು. ತಲೆಯ ಮೇಲೆ ಮಲ್ಲಿಗೆ ಹೂವಿನ ಮಾಲೆಯನ್ನು ಮುಡಿದುಕೊಂಡಿದ್ದಳು. ಕಿವಿಯಲ್ಲಿ ಮುತ್ತಿನ ಬೆಂಡವಾಲೆಗಳು ಶೋಭಿಸುತ್ತಿದ್ದವು. ಕೈಯಲ್ಲಿ ಲಕಲಕ ಹೊಳೆಯುವ ಗಿನೀ ಭಂಗಾರದ ನಾಲ್ಕು ನಾಲ್ಕು ಬಳೆಗಳಿದ್ದವು. ಕಂಠದಲ್ಲಿ ಮೋಹನ ಮಾಲೆಯೊಂದೇ ಇತ್ತು. ಇಷ್ಟರಿಂದ ಅಲಂಕೃತಳಾದ ಈ ಬಾಲಿಕೆಯು ಮೊದಲಿನ ಕನ್ಯೆಗಿಂತ ಹೆಚ್ಚು ಸುಂದರಳಾಗಿ ಕಂಡದ್ದರಲ್ಲಿ ಆಶ್ಚರ್ಯವೇನು? ಅವಳು ನಾಚುತ್ತ ಬಂದು ಚಹದ ಪೇಲೆಗಳನ್ನಿಟ್ಟು ಕೃಷ್ಣರಾಯರ ಕಡೆಗೆ ಒಮ್ಮೆ ಚೋರ ದೃಷ್ಟಿಯಿಂದ ನೋಡಿ ಕೂಡಲೇ ಹೊರಟು ಹೋದಳು. ವಿದ್ಯುಲ್ಲತೆಯಂತೆ ಹೊಳೆದು ಕ್ಷಣಾರ್ಧದಲ್ಲಿ ಮಾಯವಾದ ಸುಂದರ ಮೂರ್ತಿಯನ್ನು ನೋಡಿ ಕೃಷ್ಣರಾಯನು ಆಶ್ಚರ್ಯಚಕಿತನಾದನು. ಕೂಡಲೇ ಅವನಿಗೆ 'ಮನಮೋಹಿನಿ ರೂಪವ ನಿರೀಕ್ಷಿಸಿ ಮನದೊಳು ಭ್ರಾಂತಳಾದೆನಾ' ಎಂಬ ನಾಟಕದೊಳಗಿನ ಹಾಡೇ ನೆನಪಾಗಿರಬಹುದು. ಎಷ್ಟೋ ಹೊತ್ತಿನವರೆಗೆ ಅವನ ಕಣ್ಣೆದುರಿಗೆ ಅವಳ ಸುಂದರವಾದ ಮೂರ್ತಿಯೇ ಕಟ್ಟಿತ್ತು. ಆಗ ಅವನು—"ನಾನು ಈ ಹುಡುಗೆ

ಯನ್ನು ಲಗ್ನವಾದರೆ ಇವಳಿಂದ ನನಗೆ ಲವಲೇಶವಾದರೂ ಸುಖವು ದೊರೆಯಬಹುದೇ? ನನ್ನ ಸರ್ವ ಸಂಕಲ್ಪವೂ ಮನೋರಥವೂ ವಿಫಲವಾಗಬಹುದೇ?" ಎಂದೆಂದುಕೊಂಡು ಅವನು ಹೊರಗೆ ಬರಲು ರಮಾಬಾಯಿಯು-"ಹುಡುಗಿಯು ಮನಸ್ಸಿಗೆ ಬಂದಳೇ?" ಎಂದಳು.

ಕೃಷ್ಣರಾಯನು ಗಂಭೀರ ರೀತಿಯಿಂದ—"ಓಹೋ ಮನಸ್ಸಿಗೆ ಬಂದಳು" ಎಂದನು.

## ( ೬ )

ಅದೇ ದಿವಸ ಕೃಷ್ಣರಾಯನು ತನ್ನ ಊರಿಗೆ ಹೋದನು. ದಾರಿಯಲ್ಲಿ ತನ್ನ ಭಾವೀ ಪತ್ನಿಯ ವಿಚಾರಗಳೇ ನಡೆದಿದ್ದವು. ಊರಿಗೆ ಹೋದ ದಿವಸ ಮೂರೂ ಸಂಜೆಯ ವೇಳೆಯಲ್ಲಿ ದೇವರ ದರ್ಶನಕ್ಕೆಂದು ಗುಡಿಗೆ ಹೋದನು. ದಾರಿಯಲ್ಲಿ ಗುಡಿಯಿಂದ ತಿರುಗಿ ಬರುವ ಅನೇಕ ಜನ ಹೆಂಗಸರು ಅವನಿಗೆ ಭೆಟ್ಟಿಯಾದರು. ಕೃಷ್ಣರಾಯನು ಆ ಹೊತ್ತಿನ ದಿವಸ ಎಲ್ಲ ಜನರ ಮುಖವನ್ನು ನೋಡಹತ್ತಿದನು. ವಿಶೇಷತಃ ತರುಣ ಸ್ತ್ರೀಯರನ್ನು ಅವರಿಗೆ ತಿಳಿಯದಂತೆ ನೋಡುತ್ತಿದ್ದನು. ಅವರಲ್ಲಿ ಕೆಲವರು ಸುಂದರರಾಗಿದ್ದರು; ಕೆಲವರು ನಾದುಗಪ್ಪಿನವರಿದ್ದರು; ಕೆಲವರು ಕಾಗೆಯ ಬಣ್ಣದವರೂ ಇದ್ದರು. ಆದರೆ ಜಗದಂಬೆಯಂಥ ಕನ್ಯೆಯು ಒಬ್ಬಳಾದರೂ ನೋಡಲಿಕ್ಕೆ ದೊರೆಯಲಿಲ್ಲ. ಜಗದಂಬೆಯ ವಿಷಯವಾಗಿ ಅವನ ಮನಸ್ಸಿನಲ್ಲಿ ಅನೇಕ ವಿಚಾರಗಳ ಕಾಳಗಗಳು ನಡೆದಿದ್ದವು. ಕಡೆಗೆ ಅವನು ಜಗದಂಬೆಯನ್ನೇ ವರಿಸುವದನ್ನು ನಿಶ್ಚ

ಯಿಸಿದನು. ಇದಲ್ಲದೆ ಆವನು ಬರುವ ಮುಂದೆ ಹುಡುಗಿಯು ತನ್ನ ಮನಸ್ಸಿಗೆ ಬಂದಿರುವಳೆಂದು ಹೇಳಿ ಬಂದಿದ್ದನು.

ಇತ್ತ ಸೀತಾಬಾಯಿಯು ಮಗನ ಬರುವಿಕೆಯ ದಾರಿಯನ್ನೇ ನೋಡುತ್ತಿದ್ದಳು. ಕೃಷ್ಣರಾಯನು ಬರುತ್ತಲೇ–"ಹುಡುಗಿಯನ್ನು ನೋಡಿದಿಯಾ? ಅವಳು ನಿನ್ನ ಮನಸ್ಸಿಗೆ ಬಂದಳೇ?"

ಕೃಷ್ಣರಾಯನು ಗಂಭೀರ ರೀತಿಯಿಂದ—"ಓಹೋ ಮನಸ್ಸಿಗೆ ಬಂದಳು" ಎಂದನು.

ಸೀತಾಬಾಯಿಯು—"ಹಾಗಾದರೆ ನಾನು ಲಗ್ನದ ತಯಾರಿಯನ್ನು ಮಾಡಲ್ಯಾ!" ಎಂದಳು. ಕೃಷ್ಣರಾಯನಾದರೂ-"ಹೂ" ಎಂದನು.

ಆವತ್ತಿನ ದಿವಸ ರಾತ್ರಿ ಕೃಷ್ಣರಾಯನು ಚನ್ನಾಗಿ ಊಟ ಮಾಡಲಿಲ್ಲ. ಅವನಿಗೆ ನಿದ್ರೆಯೂ ಹತ್ತಲಿಲ್ಲ. ಜಗದಂಬೆಯ ಮೂರ್ತಿಯು ಅವನ ಕಣ್ಣೆದುರಿಗೆ ಕ್ಷಣಕ್ಷಣಕ್ಕೆ ಬಂದು ನಿಲ್ಲಹತ್ತಿತು. ಅವನ ಎದೆಯು ಹಾರಹತ್ತಿತು. ಅವನ ಪೂರ್ವದ ಆತ್ಮಗೌರವವೂ, ಅಭಿಮಾನವೂ ಮಸಕಾಗತೊಡಗಿದವು. ಮತ್ತು ತನ್ನೊಳಗೆ–"ನಾನೆಂಥ ಮೂರ್ಖನು! ಕರೇ ಹೆಂಡತಿಯಿರಬೇಕೆಂಬ ಮಾತಿನಲ್ಲಿ ಏನೂ ಸಂಶಯವಿಲ್ಲ. ಆದರೆ ಜಗದಂಬೆಗಿಂತ ಬೇರೆ ಕನ್ಯೆಯು ದೊರೆತಿದ್ದರೆ ನೆಟ್ಟಗಾಗುತ್ತಿತ್ತು" ಎಂದನು.

ಮಗನ ಬಾಡಿದ ಮುಖವನ್ನು ಸೀತಾಬಾಯಿಯು ನೋಡದೆ ಇರಲಿಲ್ಲ. ಮೊದಲು ಸುಶಿಕ್ಷಿತಳೂ ಸುಂದರಳೂ ಆದ ಕನ್ಯೆಯನ್ನು ಲಗ್ನವಾಗುವದಿಲ್ಲೆಂದು ಹೇಳಿ ಕಡೆಗೆ ಅಂಥ ಕನ್ಯೆಯನ್ನೇ ಆರಿಸಿದ್ದ

ರಿಂದ ಜನರಲ್ಲಿ ಮುಖವನ್ನು ತೋರಿಸಲು ನಾಚಿಗೆಯು ಬಂದಿರಬಹುದೆಂದು ಸೀತಾಬಾಯಿಯು ತಿಳಿದಳು. ಆ ವೇಳೆಯಲ್ಲಿ ಅವಳು ಅವನ ಹೆಚ್ಚಿನ ಉಸಾಬರಿಯನ್ನೇ ಮಾಡಲಿಲ್ಲ.

ಸೋಮವಾರ ರಾತ್ರಿ ಗಾಡಿಯಿಂದ ಕೃಷ್ಣರಾಯನು ಧಾರವಾಡಕ್ಕೆ ಹೋದನು. ಮಾರ್ಗಶೀರ್ಷ ಅಷ್ಟಮಿಯ ದಿನ ಲಗ್ನ ಮುಹೂರ್ತವಿತ್ತು. ಮುಹೂರ್ತಕ್ಕಿಂತ ನಾಲ್ಕೈದು ದಿನ ಮೊದಲೇ ಬರಲಿಕ್ಕೆ ಸೀತಾಬಾಯಿಯು ಮಗನಿಗೆ ಹೇಳಿದ್ದಳು.

## (೭)

ಕೃಷ್ಣರಾಯನ ಮುಖವು ಬಾಡಿದ್ದನ್ನು ನೋಡಿ ಅವನ ಗೆಳೆಯನಾದ ರಂಗರಾಯನಿಗೆ ತನ್ನ ಭಾವೀ ವಧುವಿನ ವಿಷಯವಾಗಿ ಮೊದಲೇ ಬರೆದು ತಿಳುಹಿಸಿದ್ದನು. ಆದ್ದರಿಂದ ಅವನ ಲಗ್ನದ ಸುದ್ದಿಯನ್ನು ಕೇಳಬೇಕೆಂದು ಎಲ್ಲರೂ ಉತ್ಸುಕರಾಗಿದ್ದರು. ಅಷ್ಟರಲ್ಲಿ ರಂಗರಾಯನು –“ಹುಡುಗೆಯ ನಿಶ್ಚಯವನ್ನು ಮಾಡಿಕೊಂಡು ಬಂದೆಯಾ?” ಎಂದು ಕೇಳಿದನು. ಆಗ ಕೃಷ್ಣರಾಯನು– “ಮಾಡಿಕೊಂಡು ಬಂದೆನು. ನನ್ನ ಮನಸ್ಸಿನಂತೆಯೇ ಹುಡುಗೆಯು ದೊರೆತಿದ್ದಾಳೆ” ಎಂದು ಹೇಳಿ, ಜಗದಂಬೆಯ ರೂಪವನ್ನೂ ವರ್ಣಿಸಿ ಹೇಳಿದನು. ಅವನ ವರ್ಣನೆಯನ್ನು ಕೇಳಿ ಅವನ ಮಿತ್ರಮಂಡಳವು ಬಾಯಿಯಲ್ಲಿಯೇ ನಗಹತ್ತಿತು. ಮತ್ತೆ ರಂಗರಾಯನು “ಹುಡುಗೆಯ ಹೆಸರೇನು?” ಎಂದನು. ಕೃಷ್ಣರಾಯನು ಗಂಭೀರ ರೀತಿಯಿಂದ “ಜಗದಂಬೆ” ಯೆಂದು ಹೆಸರನ್ನೂ ಹೇಳಿದನು. ಆ ಮೇಲಂತೂ ಕೇಳುವದೇನು? ಎಲ್ಲರೂ ಹಾ-ಹಾ-ಹಾ-ಹೀ-ಹೀ-

ಹೀ ಎಂದು ನಗಹತ್ತಿದರು. ಅಷ್ಟರಲ್ಲಿ ಕಾಶೀನಾಥನೆಂಬ ಹುಡುಗನು—“ ಹೀಗೇಕೆ ನಗುವಿರಿ? ‘ ಜಗದಂಬೆ ’ ಎಂಬ ಹೆಸರು ಕೆಟ್ಟ ಹೆಸರೇ? ಅದು ಪವಿತ್ರಳಾದ ದೇವಿಯ ಹೆಸರು. ಜಗದಂಬಾ. ಭವಾನೀ, ಕಾಳೀ, ಅಂಬಾ ಮೊದಲಾದ ಹೆಸರುಗಳನ್ನಿಡುವದನ್ನು ಬಿಟ್ಟು ನಾಟಕ ಕಾದಂಬರಿಗಳಲ್ಲಿರುವ ಶಾಕುಂತಲಾ, ಸರಳಾ. ತರಲಾ, ಲೀಲಾ, ಸುಶೀಲಾ ಶಶಿಕಲಾ, ಮನಮೋಹಿನಿ, ವಸುಂಧರಾ ಮೊದಲಾದ ಹೆಸರುಗಳು ನಿಮಗೆ ಹೆಚ್ಚು ಸೇರುತ್ತವೆಂಬಂತೆ ಕಾಣುತ್ತದೆ. ಕಾಲಗತಿಯು ಹೇಗೆ ವಿಚಿತ್ರವಾಗಿರುವದೆಂಬದನ್ನು ನೋಡಿರಿ?”

ಇಷ್ಟು ಹೊತ್ತಿನವರೆಗೆ ಕೃಷ್ಣರಾಯನು ಸುಮ್ಮನೇ ಕುಳಿತಿದ್ದನು.

## (೮)

**ಲ**ಗ್ನವು ತೀರ ಸಮೀಪಿಸಿತು. ಆ ಮಿತ್ರರ ಸಂಗಡ ಕೃಷ್ಣರಾಯನು ಹೇಗೆ ದಿವಸಗಳನ್ನು ಕಳೆದನೆಂಬುವದು ಅವನ ಮನಸಿಗೇ ಗೊತ್ತು. ಜಗದಂಬೆಯು ಅಕ್ರಾಳ ವಿಕ್ರಾಳ ಸ್ವರೂಪವು ಅವನ ಕಣ್ಣೆದುರಿಗೆ ಬರುತ್ತಲೇ ಅವನ ಹೃದಯವು ವ್ಯಾಕುಲವಾಗುತ್ತಿತ್ತು. ಕೃಷ್ಣರಾಯನು ಕಾಲೇಜಕ್ಕೆ ಹೋಗುತ್ತಿದ್ದನು ಮಾತ್ರ. ಆದರೆ ಅಲ್ಲಿಯ ಪ್ರೊಫೇಸರರು ನೆಟ್ಟಗೆ ಉಚ್ಚಾರವನ್ನೇ ಮಾಡುತ್ತಿದ್ದಿಲ್ಲವೆಂದು ಅವನಿಗೆ ಅನಿಸಹತ್ತಿತು. ಅವನಾದರೂ ಮೊದಲಿನಂತೆ ಸ್ನಾನ ಸಂಧ್ಯಾ ಮೊದಲಾದ ನಿತ್ಯಕರ್ಮಗಳನ್ನು ಲಕ್ಷ್ಯಗೊಟ್ಟು ಮಾಡುತ್ತಿದ್ದಿಲ್ಲ. ಮಿತ್ರರ ಸಂಗಡಲೂ ಅವನು ಅಷ್ಟು ಮಾತಾಡುತ್ತಿರಲಿಲ್ಲ. ಆದ್ದರಿಂದ ಅವನ ಮಿತ್ರರು—“ ವಿರಹ ವ್ಯಥೆಯಿಂದ

ವಿಹ್ವಲನಾಗಿರುವದರಿಂದ ನಿನ್ನ ಸ್ಥಿತಿಯು ಹೀಗಾಗಿರುವದು" ಎಂದು ಅನ್ನುತ್ತಿದ್ದರು.

ನಿದ್ರಾದೇವಿಯೂ ಅವನ ಮೇಲೆ ಕೋಪಿಸಿಕೊಂಡಿದ್ದಳು. ಪುಸ್ತಕದಲ್ಲಿಯ ಅಕ್ಷರಗಳು ಅವನಿಗೆ ಸ್ಪಷ್ಟವಾಗಿ ಕಾಣುತ್ತಿದ್ದಿಲ್ಲ. ನಿದ್ರೆಯು ಬರಬೇಕೆಂದು ಅವನು ಎಷ್ಟೋ ಸಾರೆ ಔಷಧವನ್ನು ಸಹ ತಲೆಗೆ ಕಟ್ಟಿಕೊಳ್ಳುತ್ತಿದ್ದನು. ಅದರೂ ವ್ಯರ್ಥವಾಯಿತು. ಎಂದಾದರೊಂದು ದಿನ ಸ್ವಲ್ಪ ನಿದ್ರೆಯು ಹತ್ತಿದರೆ ಅವನು ನಿದ್ರೆಯಲ್ಲಿ ಬರೇ ಕನಸುಗಳನ್ನೇ ಕಾಣುತ್ತಿದ್ದನು. ಒಂದು ದಿವಸ ಸ್ವಪ್ನ ಬಿದ್ದಾಗ್ಗೆ ಅವನ ಭಾವೀ ಪತ್ನಿಯಾದ ಜಗದಂಬೆಯು ನಿಜವಾದ ಜಗದಂಬೆಯಂತೆ ಅಕ್ರಾಳ ವಿಕ್ರಾಳ ರೂಪ ಧಾರಣವನ್ನು ಮಾಡಿದ್ದನ್ನು ಅವನು ನೋಡಿದನು. ಅವಳ ನಾಲಿಗೆಯು ಮುಖದಿಂದ ಹೊರಗೆ ಬಂದಿತ್ತು; ಅವಳಿಗೆ ಎರಡು ಹೊಸ ಕೈಗಳು ಬಂದಿದ್ದವು; ಅವಳ ಒಂದು ಕೈಯಲ್ಲಿ ತ್ರಿಶೂಲವೂ ಇನ್ನೊಂದು ಕೈಯಲ್ಲಿ ರಕ್ತಮಯವಾದ ಖಡ್ಗವೂ, ಮೂರನೆಯ ಕೈಯಲ್ಲಿ ರಕ್ತವು ಬಸಿಯುತ್ತಿರುವ ರುಂಡವೂ ಇತ್ತು. ಇಂಥ ಭಯಂಕರವಾದ ಮೂರ್ತಿಯನ್ನು ನೋಡಿ ಕೃಷ್ಣರಾಯನು ಹೆದರಿದನು. ಅವನ ಮೈಮೇಲಿನ ವಸ್ತ್ರಗಳು ಬೆವರಿನಿಂದ ತೊಯ್ದು ಹೋದವು. ಇದಲ್ಲದೆ ಆ ರುಂಡವಾದರೂ ಯಾರದು? ಅದೂ ಕೃಷ್ಣರಾಯನದೇ? ಇಂಥ ಭಯಂಕರವಾದ ಸ್ವಪ್ನವನ್ನು ಕಂಡು ಅವನು ಚಿಟ್ಟನೇ ಚೀರಿದನು. ಅವನ ಮಿತ್ರರೆಲ್ಲರೂ ಗಾಬರಿಗೊಂಡು ಓಡಿ ಬಂದರು. ಕೃಷ್ಣರಾಯನು ಅವರಿಗೊಂದು ಸುಳ್ಳನ್ನು ಹೇಳಿ ಅವರನ್ನು ತಿರುಗಿ ಕಳುಹಿಸಿದನು.

ಮತ್ತೊಂದು ದಿವಸ ಅವನಿಗೆ ಇಂಥ ಸ್ವಪ್ನವೇ ಬಿತ್ತು. ಅದರಲ್ಲಿ ಅವನು ದಾರೀ ತಪ್ಪಿ ಒಂದು ಕೆಟ್ಟಡವಿಯಲ್ಲಿ ಹೋಗಿ ಬಿಟ್ಟಿದ್ದನು; ಆಕಾಶವು ಕಾರ್ಮೋಡಗಳಿಂದ ಮುಸುಕಿ ಹೋಗಿತ್ತು; ಸುತ್ತಲೂ ಕಾಡಿಗೆಯಂತೆ ಕತ್ತಲೆಯು ಪಸರಿಸಿತ್ತು; ಇಂಥ ಸಮಯದಲ್ಲಿ ಒಂದು ಕರೇ ಬಣ್ಣದ ಅಡವಿಯ ಎಮ್ಮೆಯು ಇವನನ್ನು ಬೆನ್ನಟ್ಟಿತು. ಆ ಎಮ್ಮೆಯ ಮೈಮೇಲೆ ಜಗದಂಬೆಯು ಉಟ್ಟ ಕರೇ ಬಣ್ಣದ ಸೀರೆಯೇ ಇತ್ತು. ಆದರೆ ಕಿವಿಗಳಿಂದ ಸ್ವಲ್ಪ ದೂರದಲ್ಲಿ ಎರಡು ಕೋಡುಗಳು ಮಾತ್ರ ಇದ್ದವು. ಕೂಡಲೇ ಆ ಎಮ್ಮೆಯು ಕೆಂಪು ಗಣ್ಣು ಮಾಡಿ ಓಡುತ್ತೋಡುತ್ತ ಬಂದು ಕೃಷ್ಣರಾಯನ ಹೊಟ್ಟೆಯಲ್ಲಿ ತನ್ನ ಕೋಡುಗಳನ್ನು ಚುಚ್ಚಿ ಅವನನ್ನು ಕೊಂದು ಬಿಟ್ಟಿತು. ಆ ವೇಳೆಯಲ್ಲಿಯೂ ಸಹ ಅವನು ಚಿಟ್ಟನೇ ಚೀರಿ ಎಲ್ಲರನ್ನೂ ಗಾಭರಿ ಮಾಡಿದನು.

ಬರಬರುತ್ತ ಕೃಷ್ಣರಾಯನಲ್ಲಿ ಉತ್ಸಾಹವೂ ಕಡಿಮೆಯಾಗಿ ಹೋಯಿತು. ಯಾವದಾದರೊಂದು ನೆವ ಮಾಡಿ ಲಗ್ನವನ್ನು ಮುರಿದುಹಾಕಬೇಕೆಂದು ತಾಯಿಗೆ ಪತ್ರವನ್ನು ಬರೆಯಬೇಕೆಂಬ ವಿಚಾರವೂ ಅವನ ತಲೆಯಲ್ಲಿ ಬಂತು. ಇವತ್ತಿನ ದಿವಸ ಅವನ್ನು ಕಾಲೇಜಕ್ಕೆ ಹೋಗದೆ ಒಳಗಿನ ಚಿಲಕವನ್ನು ಹಾಕಿ ತನ್ನ ಕೋಣೆಯಲ್ಲಿಯೇ ಕುಳಿತುಕೊಂಡು ಪತ್ರವನ್ನು ಬರೆಯುಹತ್ತಿದನು. ಒಂದರ ಹಿಂದೊಂದು ಹೀಗೆ ಅನೇಕ ಪತ್ರಗಳನ್ನು ಬರೆದು ಕಡೆಗೆ ಎಲ್ಲ ಪತ್ರಗಳನ್ನೂ ಚೂರು ಚೂರು ಮಾಡಿ ಬಿಟ್ಟನು. ಛೀ, ಛೀ, ಲಗ್ನವು ಮುರಿದ ಸಂಗತಿಯು ಜನರಿಗೆ ಗೊತ್ತಾದರೆ ಜನರು ನನಗೆ ಏನನ್ನಬಹುದು? ಎಷ್ಟು ಉಪಹಾಸವನ್ನು ಮಾಡಬಹುದು? ಜನರ

ಉಪವಾಸಕ್ಕಂಜಿ ಜಗದಂಬೆಯನ್ನು ಲಗ್ನವಾದರೆ ನನ್ನ ಆಯುಷ್ಯವು ಎಷ್ಟು ದುಃಖಮಯವಾಗಬಹುದು? ಎಂಬ ವಿಚಾರಗಳಲ್ಲಿ ಒಂದೂ ಬಗೆ ಹರಿಯಲಿಲ್ಲ.

ಹಗಲು ಕಳೆದು ಹೋಯಿತು. ರಾತ್ರಿಯು ಬಂತು. ಕಡೆಗೆ ಅವನು ಆ ಹೊತ್ತಿನ ದಿವಸ (ರಾತ್ರಿ) ಕಾಶೀ ಕಡೆಗೆ ಹೋಗಬೇಕೆಂದು ನಿಶ್ಚಯಿಸಿ ತನ್ನ ಗಂಟುಗಪಡಿಗಳನ್ನೆಲ್ಲ ಸಿದ್ಧಪಡಿಸಿದನು. ಇಷ್ಟರಲ್ಲಿ ಗಡಿಯಾರವು "ಠಣ್ ಠಣ್ ಠಣ್" ಎಂದು ಬಾರಿಸಿತು. ಗಾಡಿಯ ವೇಳೆಯೂ ಮೀರಿ ಹೋಗಿತ್ತು. ಆದ್ದರಿಂದ ಅವನು—"ದೈವದಲ್ಲಿದ್ದದ್ದು ಆಗಲಿ. ಸುಮ್ಮನೆ ಮನೆಗೆ ಹೋದರಾಯಿತು" ಎಂದಂದುಕೊಂಡು ಬೆಳಗಿನ ಗಾಡಿಯಿಂದ ತನ್ನ ಊರಿಗೆ ಹೊರಟನು.

## (೬)

**ಊ**ರಲ್ಲಿ ಅವನ ಹೃದ್ರೋಗವು ಕಡಿಮೆಯಾಗಿತ್ತು. ಈಗ ಅವನ ತಲೆಯಲ್ಲಿ "ದೈವದಲ್ಲಿದ್ದದ್ದನ್ನು ಅನುಭೋಗಿಸಲೇ ಬೇಕು" ಎಂಬ ವೇದಾಂತ ವಿಚಾರವು ತುಂಬಿಕೊಂಡಿತ್ತು. ಯೋಗ್ಯ ವೇಳೆಯಲ್ಲಿ ಲಗ್ನದ ಮುಹೂರ್ತವೂ ಬಂದು ಬಿಟ್ಟಿತು. ಕೃಷ್ಣರಾಯನು ಅಶ್ವಾರೂಢನಾಗಿ ವಧುಗೃಹಕ್ಕೆ ತೆರಳಿದನು. ಮುಂದೆ ಸ್ವಲ್ಪ ವೇಳೆಯಲ್ಲಿಯೇ ಮಂಗಲಾಷ್ಟಕವು ಆರಂಭವಾಯಿತು. "ಸುಮುಹೂರ್ತೇ ಸಾವಧಾನ" ಎಂದು ಆಚಾರ್ಯವರ್ಯರು ಉಚ್ಚರಿಸುವದೊಂದೇ ತಡ; ಅಕ್ಕಿಕಾಳು ಬಿದ್ದು ಹೋದವು. ವಧೂವರರ ನಡುವಿನ ಅಂತರಪಟವೂ ದೂರವಾಯಿತು. ಕೃಷ್ಣರಾಯನು ತನ್ನ

ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು ಜಗದಂಬೆಯು ಕೊರಳಲ್ಲಿ ಮಾಲೆಯನ್ನು ಹಾಕಿದನು. ವಧುವಾದರೂ ವರನ ಕೊರಳಲ್ಲಿ ಮಾಲೆಯನ್ನು ಹಾಕಿದಳು. ರಣಾಂಗಣದಲ್ಲಿಯ ಬಂದೂಕ ತೋಪುಗಳ ಧಡಧಡಾಟ, ಖಡ್ಗಗಳ ಖಣಾಖಣಾಟ ಸಪ್ಪಳವನ್ನು ಕೇಳಿ, ಒಬ್ಬ ಅಂಜುಬುರುಕ ಸಿಪಾಯಿಯಾದರೂ ಸಹ ಕ್ಷಣ ಹೊತ್ತು ತನ್ನ ಮರಣದ ಭಯವನ್ನೂ ಸಹ ಮರೆಯುವನು. ಅದರಂತೆಯೇ ನಮ್ಮ ಕೃಷ್ಣರಾಯನ ಸ್ಥಿತಿಯಾಗಿತ್ತು.

ಆದರೆ ಚಮತ್ಕಾರವನ್ನು ಎಷ್ಟೆಂದು ಹೇಳಬೇಕು! ಒಂದು ದೀರ್ಘ ನಿಶ್ವಾಸವನ್ನು ಬಿಟ್ಟು ಅಂಜಂಜುತ್ತ ತನ್ನ ಕಣ್ಣುಗಳನ್ನು ತೆರೆದು ನೋಡುತ್ತಾನೆ. ಜಗದಂಬೆಯು ಅಲೌಕಿಕವಾದ ಸುಂದರ ರೂಪವನ್ನು ತಾಳಿದ್ದು ಅವನ ಕಣ್ಣಿಗೆ ಬಿತ್ತು. ಅವನು ಕನಸಿನಲ್ಲಿ ಹಾಗೂ ಪ್ರತ್ಯಕ್ಷವಾಗಿ ಕಂಡ ಜಗದಂಬೆಯು ಕೃಷ್ಣವರ್ಣವೂ, ಉದ್ದನ್ನ ನಾಲಿಗೆಯೂ, ಅಕ್ರಾಳ ವಿಕ್ರಾಳ ಮೂರ್ತಿಯೂ ಮಾಯವಾಗಿ ಕೇತಕಿ ಪುಷ್ಪವನ್ನು ಸಹ ನಾಚಿಸುವಂಥ ಅವಳ ಗೌರವರ್ಣವನ್ನೂ, ಮನೋಹರವಾದ ಮುಖಕಾಂತಿಯನ್ನೂ ನೋಡಿ ತಾನು ಪುನಃ ಸ್ವಪ್ನಸೃಷ್ಟಿಯಲ್ಲಿರುವೆನೆಂದು ಅವನಿಗೆ ಭಾಸವಾಯಿತು. ಸ್ವಲ್ಪ ಹೊತ್ತಿನ ಮೇಲೆ ತನ್ನ ಹತ್ತರ ನಿಂತಿದ್ದ ಮೂರ್ತಿಯು ಜಗದಂಬೆಯದಾಗಿರದೆ, ಜಗದಂಬೆಯ ದರ್ಶನ ಪ್ರಸಂಗದಲ್ಲಿ ವಿದ್ಯುಲ್ಲತೆಯ ಹಾಗೆ ಹೊಳೆದು ಹೋಗಿ ಕ್ಷಣಾರ್ಧದಲ್ಲಿ ಅದೃಶ್ಯಳಾದ **ಸುಂದರಿಯ ಮನಮೋಹಿನಿಯ ಮೂರ್ತಿ**ಯಾಗಿತ್ತು.

ಮುಂದೆ ಒಂದು ವರ್ಷದಲ್ಲಿಯೇ ಆ ನೂತನ ದಂಪತಿಗಳಿಗೆ ಏಕಾಂತದಲ್ಲಿ ಭೆಟ್ಟಿಯಾಗುವ ಸುಯೋಗವು ಬಂತು. ಆಗ ಕೃಷ್ಣ

ರಾಯನು ತನ್ನ ಪತ್ನಿಯ ಮಧುರವಾದ ಭಾಷಣವನ್ನು ಕೇಳಬೇ ಕೆಂದು ಉತ್ಸುಕನಾಗಿದ್ದನು. ಆದರೆ ಅವಳ ಮೌನಭಂಗವನ್ನು ಮಾಡುವ ಪ್ರಯತ್ನಗಳೆಲ್ಲವೂ ನಿಷ್ಫಲವಾದವು. ಕಡೆಗೆ ಅವನು ಈ ಉಪಾಯವನ್ನು ಮಾಡಿದನು. ಸ್ತ್ರೀಯರಿಗೆ ತವರುಮನೆಯ ಅಭಿಮಾನವು ಬಹಳ ಇರುತ್ತದೆ. ತವರುಮನೆಯವರ ನಿಂದೆಯನ್ನು ಅವರು ಎಂದೂ ಕೇಳರು. ಆದ್ದರಿಂದ ಕೃಷ್ಣರಾಯನು—"ನಿನ್ನ ತಾಯಿಯು ಕಪಟ ಮಾಡಿ ನಿನ್ನನ್ನು ನನ್ನ ಕೊರಳಿಗೆ ಕಟ್ಟಿದಳು" ಎಂದು ನಸುನಕ್ಕನು.

ಮನಮೋಹಿನಿಯು ನಾಚುತ್ತ—"ನೀವು ಕುರೂಪಳಾದ ಸ್ತ್ರೀಯ ಳನ್ನೇ ಲಗ್ನವಾಗುವಿರೆಂದು ಹೇಳಿ ಎಲ್ಲರನ್ನೂ ವಂಚಿಸಿ ನನ್ನನ್ನು ಲಗ್ನವಾದದ್ದು ಹೇಗೆ?" ಎಂದಳು.

ಕೃಷ್ಣರಾಯನು—"ಅದಿರಲಿ. ಆದರೆ ಆ ಜಗದಂಬೆಯು ಯಾರು?"

ಮನಮೋಹಿನಿ—"ನಮ್ಮ ಮನೆಯ ಮುಸರೀ ತಿಕ್ಕುವಾಕೆಯ ಮಗಳು" ಎಂದಳು.

ಹೆಂಡತಿಯಾದ ಮನಮೋಹಿನಿಯ ಮಾತುಗಳನ್ನು ಕೇಳಿ ಕೃಷ್ಣ ರಾಯನ ಮನಸ್ಸಿನಲ್ಲಿ ಹೇಗಾಗಿರಬಹುದು?

* * * *

ಮುಂದೆ ಗಂಡಹೆಂಡಂದಿರಿಬ್ಬರೂ ಅತ್ಯಂತ ಪ್ರೇಮದಿಂದಿರಹತ್ತಿ ದರು. ಈಗ ಕೃಷ್ಣರಾಯರು ಹೆಸರಾದ ವಕೀಲರಾಗಿರುವರು. ಮನಮೋಹಿನಿಯೂ ಮ್ಯಾಟ್ರಿಕ್ಯೂಲೇಶನ್ ಪರೀಕ್ಷೆಯಲ್ಲಿ ತೇರ್ಗಡೆ

